## ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 301
2 ಸದಸ್ಯರ ಹೆಸರು : ಶ್ರೀ ಪಿ.ಆರ್. ರಮೇಶ್ (ನಾಮ ನಿರ್ದೇಶನ ಹೊಂದಿದವರು)
3 ಉತ್ತರಿಸುವ ದಿನಾಂಕ : 17-02-2022
4 ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 5 ವರ್ಷಗಳಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ದೈನಂದಿನವಾಗಿ ಉತ್ಪಾದನೆಯಾಗುತ್ತಿರುವ ಕಸದ (ಹಸಿ/ಒಣ) ಪ್ರಮಾಣವೆಷ್ಟು ಮತ್ತು ಸದರಿ ಉತ್ಪಾದಿತ ಕಸದ ಸಂಗ್ರಹಣೆಯ ಪ್ರಮಾಣವೆಷ್ಟು; (ವಾರ್ಷಿಕವಾರು ವಿವರ ನೀಡುವುದು) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಳೆದ 5 ವರ್ಷಗಳಿಂದ ದೈನಂದಿನವಾಗಿ ಉತ್ಪಾದನೆಯಾಗುತ್ತಿರುವ ಕಸದ ಪ್ರಮಾಣ ಹಾಗೂ ಕಸದ ಸಂಗ್ರಹಣೆಯ ಪ್ರಮಾಣದ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ | ಸರ್ಕಾರದಿಂದ ಹಸಿ/ಒಣ ಕಸದ ಸಂಗ್ರಹಣೆಗೆ, ಸಂಸ್ಕರಣೆಗೆ ಮತ್ತು ಸಾಗಾಣಿಕೆಗೆ ಉಪಯೋಗಿಸುತ್ತಿರುವ ಒಟ್ಟು ವಾಹನಗಳ (Auto, Lorry, Tipper, Compactor etc...) ಸಂಖ್ಯೆ ಎಷ್ಟು (ವಿವರ ನೀಡುವುದು); | ಬಿಬಿಎಂಪಿ ವ್ಯಾಪ್ತಿಯಲ್ಲಿ ಉತ್ಪತ್ತಿಯಾಗುತ್ತಿರುವ ಹಸಿ / ಒಣ ಕಸ ಸಂಗ್ರಹಣೆ, ಸಂಸ್ಕರಣೆ ಮತ್ತು ಸಾಗಾಣಿಕೆಗೆ ಉಪಯೋಗಿಸುತ್ತಿರುವ ವಾಹನಗಳ ವಿವರಗಳು ಈ ಕೆಳಗಿನಂತಿವೆ:<br>ಆಟೋ ಟಿಪ್ಪರ್‌ಗಳ ಸಂಖ್ಯೆ — ಸುಮಾರು 4,500<br>ಕಾಂಪ್ಯಾಕ್ಟರ್‌ಗಳ ಸಂಖ್ಯೆ — 656<br>ಒಣತ್ಯಾಜ್ಯ ಸಂಗ್ರಹಣೆಗೆ ಉಪಯೋಗಿಸುತ್ತಿರುವ ಆಟೋಗಳ ಸಂಖ್ಯೆ — 250 |
| ಇ | ಹಸಿ/ಒಣ ಕಸದ ಸಂಗ್ರಹಣೆ, ಸಂಸ್ಕರಣೆ ಮತ್ತು ನಿರ್ವಹಣೆ ಮಾಡುವಲ್ಲಿ ಪಾಲಿಕೆಯಿಂದ ಸ್ಥಾಪಿತವಾಗಿರುವ ಘಟಕಗಳ ಸಂಖ್ಯೆ ಎಷ್ಟು; ಮತ್ತು ಭೂಭರ್ತಿ ಮಾದರಿ (Landfill) ಗಳ ಸಂಖ್ಯೆ ಎಷ್ಟು; ಮತ್ತು ಸದರಿ ಘಟಕಗಳಿಗೆ ಘನತ್ಯಾಜ್ಯ ಸಾಗಾಣಿಕೆ ಮಾಡುತ್ತಿರುವ ಪ್ರಮಾಣದ ವಿವರಗಳನ್ನು ನೀಡುವುದು; ಪಾಲಿಕೆಗೆ ತಗುಲಿದ ಎರಡು ವರ್ಷದ | ಹಸಿ/ಒಣ ಕಸದ ಸಂಗ್ರಹಣೆಗೆ ಸಂಸ್ಕರಣೆಗೆ ಮತ್ತು ನಿರ್ವಹಣೆ ಮಾಡುವಲ್ಲಿ ಪಾಲಿಕೆಯಿಂದ ಸ್ಥಾಪಿತವಾಗಿರುವ ಘಟಕಗಳ ಸಂಖ್ಯೆ ಒಟ್ಟು 7 ಮತ್ತು ಪ್ರಸ್ತುತ ಭೂಭರ್ತಿ ಮಾಡುತ್ತಿರುವ ಪ್ರದೇಶದ ಸಂಖ್ಯೆ: 1.<br><br>ಸದರಿ ಘಟಕಗಳಿಗೆ ಕಳೆದ 2 ವರ್ಷದಿಂದ ಘನತ್ಯಾಜ್ಯವನ್ನು ಸಾಗಾಣಿಕೆ ಮಾಡುತ್ತಿರುವ ಪ್ರಮಾಣದ ವಿವರಗಳನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ.<br><br>ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ 7 ಸಂಸ್ಕರಣಾ ಘಟಕಗಳು ಹಾಗೂ ಭೂಭರ್ತಿ ಘಟಕಗಳ ನಿರ್ವಹಣೆ ಮಾಡಲು |

| | | |
|---|---|---|
| | ವೆಚ್ಚದ ವಿವರ ನೀಡುವುದು; ಕಸದ ಸಂಸ್ಕರಣೆಯಿಂದ ತಯಾರಾದ ಗೊಬ್ಬರದ ಪ್ರಮಾಣ ಮತ್ತು ಪಾಲಿಕೆಗೆ ಇದರಿಂದ ಬಂದ ಆದಾಯ ಹಾಗೂ ಉಪಯೋಗಕ್ಕೆ ಬಾರದ ತ್ಯಾಜ್ಯದ (Rejects) ಪ್ರಮಾಣವೆಷ್ಟು? (ವಿಲೇವಾರಿಯ ಕ್ರಮದ ಕುರಿತು ಮಾಹಿತಿ ನೀಡುವುದು) | ಪಾಲಿಕೆಗೆ ಎರಡು ವರ್ಷದಲ್ಲಿ ಸುಮಾರು ರೂ.100.00 ಕೋಟಿಗಳಷ್ಟು ವೆಚ್ಚವಾಗಿರುತ್ತದೆ.<br><br>ಕಸದ ಸಂಸ್ಕರಣೆಯಿಂದ ಒಟ್ಟಾರೆ 17,109 ಮೆಟ್ರಿಕ್ ಟನ್ ಗೊಬ್ಬರ ಉತ್ಪಾದನೆಯಾಗಿರುತ್ತದೆ. ಸದರಿ ಗೊಬ್ಬರ ಮಾರಾಟದಿಂದ ಸುಮಾರು ರೂ.227.67 ಲಕ್ಷದಷ್ಟು ಆದಾಯ ಬಂದಿರುತ್ತದೆ. ಇದರ ಜೊತೆಗೆ ರೂ.163.00 ಲಕ್ಷಗಳಷ್ಟು ಮಾರ್ಕೆಟ್ ಡೆವೆಲಪ್‌ಮೆಂಟ್ ಅಸಿಸ್ಟೆನ್ಸ್ ರೂಪದಲ್ಲಿ ಸ್ವಚ್ಛ ಭಾರತ ಯೋಜನೆಯಡಿ ಅನುದಾನ ಪಡೆಯಲಾಗಿದ್ದು, ಪ್ರಸ್ತುತ ಸುಮಾರು 3000 ಮೆ.ಟನ್ ರಷ್ಟು ಗೊಬ್ಬರವು ಸ್ಟಾಕ್ ಇರುತ್ತದೆ.<br><br>7 ಘನತ್ಯಾಜ್ಯ ನಿರ್ವಹಣಾ ಘಟಕಗಳಿಂದ ಸುಮಾರು ಶೇ.35% ಪ್ರೋಸೆಸ್ ರಿಜೆಕ್ಟ್ ಉತ್ಪತ್ತಿಯಾಗುತ್ತಿದ್ದು, ಅದನ್ನು ಅವಶ್ಯವಿರುವ ರೈತರು ತಮ್ಮ ಜಮೀನುಗಳಿಗೆ ಗೊಬ್ಬರವಾಗಿ ಬಳಸಲು ಸಂಸ್ಕರಣಾ ಘಟಕದಿಂದ ಸದರಿ ಗೊಬ್ಬರವನ್ನು ಉಚಿತವಾಗಿ ಪಡೆದು, ಸಾಗಣೆ ವೆಚ್ಚವನ್ನು ಮಾತ್ರ ರೈತರೇ ಸ್ವತಃ ಭರಿಸಿ ಸಾಗಿಸಿಕೊಳ್ಳುತ್ತಿದ್ದರು. ಉಳಿದ ಪ್ರೋಸೆಸ್ ರಿಜೆಕ್ಟ್‌ನ್ನು ಭೂ ಭರ್ತಿ ಘಟಕಕ್ಕೆ ಕಳುಹಿಸಲಾಗುತ್ತಿದೆ.<br><br>ಸದರಿ ಸಂಸ್ಕರಣಾ ಘಟಕಗಳಿಗೆ ಪ್ರತಿ ದಿನ ಸರಬರಾಜು ಮಾಡುತ್ತಿರುವ ಸರಾಸರಿ ಹಸಿ ಘನತ್ಯಾಜ್ಯದ ಪ್ರಮಾಣ ಒಟ್ಟು 649 ಮೆಟ್ರಿಕ್ ಟನ್‌ಗಳಷ್ಟಿದ್ದು, ವಿವರಗಳನ್ನು <u>ಅನುಬಂಧ-3</u> ರಲ್ಲಿ ನೀಡಲಾಗಿದೆ. |
| ಈ | ಕಸದ ಸಂಸ್ಕರಣೆ ಮತ್ತು ನಿರ್ವಹಣೆ ಘಟಕಗಳಲ್ಲಿ ಕಾಂಪೋಸ್ಟ್ ಪದ್ಧತಿಯಲ್ಲಿ ಉತ್ಪಾದನೆಗೊಳ್ಳುವ ಕಲುಷಿತ ನೀರಿನ (Leachate) ಪ್ರಮಾಣ (ಘಟಕವಾರು) ಮತ್ತು ಕಲುಷಿತ ನೀರಿನ (Leachate) ಸಂಸ್ಕರಣೆಗೆ ಪಾಲಿಕೆಗೆ ಉಪಯೋಗಿಸಲ್ಪಟ್ಟಿರುವ ತಾಂತ್ರಿಕತೆ ಮಾದರಿ ಯಾವುದು ಮತ್ತು ಕಲುಷಿತ ನೀರಿನ (Leachate) ನಿರ್ವಹಣೆಗೆ ಪಾಲಿಕೆಗೆ ವಾರ್ಷಿಕವಾರು / ಮಾಸಿಕವಾರು ತಗುಲಿದ ವೆಚ್ಚವೆಷ್ಟು; (ಮಾಹಿತಿ ನೀಡುವುದು)? | ಕಲುಷಿತ ನೀರಿನ (Leachate) ಪ್ರಮಾಣ ಸುಮಾರು 1 ಮೆಟ್ರಿಕ್ ಟನ್ ತ್ಯಾಜ್ಯಕ್ಕೆ 60 ಲೀಟರ್ ಉತ್ಪಾದನೆಯಾಗುತ್ತಿದ್ದು, ಪ್ರಾಯೋಗಿಕವಾಗಿ ಸುಮಾರು 25000 ಲೀಟರ್ ಲೀಚೆಟ್‌ನ್ನು ಪ್ರತಿ ದಿನ ಟ್ರೀಟ್‌ಮೆಂಟ್ ಮಾಡುವ ಘಟಕವನ್ನು ದೊಡ್ಡಬಿದರಕಲ್ಲು ತ್ಯಾಜ್ಯ ಸಂಸ್ಕರಣಾ ಘಟಕದಲ್ಲಿ Aqua Flow Hyderabad ಕಂಪನಿಯಿಂದ ನಿರ್ಮಾಣ ಮಾಡಲಾಗಿದೆ. ಸದರಿ ಘಟಕವು ಪ್ರತಿ ದಿನ 25000 ಲೀಟರ್ ಲೀಚೆಟ್ ಅನ್ನು ಟ್ರೀಟ್ ಮಾಡಿ ತೋರಿಸುವ ಕಾರ್ಯದಲ್ಲಿ ಕ್ರಮ ಕೈಗೊಂಡಿರುತ್ತದೆ. Biological Treatment followed by Reverse Osmosis ತಾಂತ್ರಿಕ ಮಾದರಿಯಿಂದ ಲೀಚೆಟ್‌ನ್ನು ಟ್ರೀಟ್ ಮಾಡಲಾಗುತ್ತಿದೆ. ಅದೇ ರೀತಿ ಬೆಳ್ಳಹಳ್ಳಿ ಭೂಭರ್ತಿ ಘಟಕದಲ್ಲಿ ನೂತನವಾದ ಲೀಚೆಟ್ ಸಂಸ್ಕರಣಾ ಘಟಕವನ್ನು |

...3/-

| | | |
|---|---|---|
| | | ಸ್ಥಾಪಿಸಲಾಗಿದ್ದು, ಇದರಲ್ಲಿ ಪ್ರತಿದಿನ ಸುಮಾರು 80000 ಲೀಟರ್‌ನಷ್ಟು ಲೀಚೆಟ್ ಅನ್ನು ಸಂಸ್ಕರಣೆ ಮಾಡಲಾಗುತ್ತಿದೆ. ಪಾಲಿಕೆಗೆ ಮಾಸಿಕವಾರು ಸುಮಾರು ರೂ.9.5 ಲಕ್ಷ ಖರ್ಚು ಇರುತ್ತದೆ. |
| ಉ | ಕಸದ ಸಂಸ್ಕರಣೆ ಮತ್ತು ನಿರ್ವಹಣೆ ಘಟಕಗಳಿಗೆ ಸಂಬಂಧಿಸಿದಂತೆ ಕಳೆದ 5 ವರ್ಷಗಳಿಂದ ಪರಿಸರ ಮಾಲಿನ್ಯ ಇಲಾಖೆ ಮತ್ತು ಎನ್‌ಜಿಟಿ ವತಿಯಿಂದ ನಿರ್ದೇಶನಗಳು ಮತ್ತು ಆಕ್ಷೇಪಣೆಗಳು ಬಂದಿದೆಯೇ; ಬಂದಿದ್ದಲ್ಲಿ, ಅದರ ಪೂರ್ಣ ಮಾಹಿತಿ ಮತ್ತು ಅದರ ಸ್ಥಿತಿಗತಿಗಳ ವಿವರ ನೀಡುವುದು) | ಕಸದ ಸಂಸ್ಕರಣೆ ಮತ್ತು ನಿರ್ವಹಣೆ ಘಟಕಗಳಿಗೆ ಸಂಬಂಧಿಸಿದಂತೆ ಕಳೆದ 5 ವರ್ಷಗಳಿಂದ ಪರಿಸರ ಮಾಲಿನ್ಯ ಇಲಾಖೆ ಮತ್ತು ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧಿಕರಣ ವತಿಯಿಂದ ನಿರ್ದೇಶನಗಳು ಮತ್ತು ಆಕ್ಷೇಪಣೆಗಳು ಬಂದಿರುವುದಿಲ್ಲ. ಆದರೆ ಲಿಂಗಧೀರನಹಳ್ಳಿ ಘಟಕಕ್ಕೆ ಸಂಬಂಧಪಟ್ಟಂತೆ ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧಿಕರಣ ರವರು ಹೊಸದಾಗಿ Environmental Clearance ಪಡೆಯಲು ಬಿಬಿಎಂಪಿಗೆ ಸೂಚಿಸಿದ್ದು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ವತಿಯಿಂದ Statutory approval ಪಡೆದು ಲಿಂಗಧೀರನಹಳ್ಳಿ ಘಟಕ ಪ್ರಾರಂಭಿಸಲು ದಿನಾಂಕ: 06.12.2021 ರಲ್ಲಿ ಆದೇಶ ನೀಡಿರುತ್ತದೆ. |
| ಊ | ಕಳೆದ 5 ವರ್ಷಗಳಿಂದ ಕಸದ ಸಂಗ್ರಹಣೆ, ಸಾಗಾಣಿಕೆ ಹಾಗೂ ನಿರ್ವಹಣೆ ಘಟಕಗಳಿಗೆ ಪಾಲಿಕೆಯಿಂದ ವೆಚ್ಚವಾಗುತ್ತಿರುವ ಒಟ್ಟು ಮೊತ್ತವೆಷ್ಟು? (ಪ್ರತ್ಯೇಕವಾಗಿ ಘಟಕವಾರು, ವಾರ್ಷಿಕವಾರು ಮಾಹಿತಿ ನೀಡುವುದು) | ಕಳೆದ 5 ವರ್ಷಗಳಿಂದ ಕಸದ ಸಂಗ್ರಹಣೆ, ಸಾಗಾಣಿಕೆ ಹಾಗೂ ನಿರ್ವಹಣೆ ಘಟಕಗಳಿಗೆ ಪಾಲಿಕೆಯಿಂದ ವೆಚ್ಚವಾಗುತ್ತಿರುವ ಒಟ್ಟು ಮೊತ್ತದ ವಿವರಗಳನ್ನು **ಅನುಬಂಧ-4** ರಲ್ಲಿ ನೀಡಲಾಗಿದೆ. |

ಸಂಖ್ಯೆ: ನಅಇ 55 ಎಂಎನ್‌ವೈ 2022 (ಇ)

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

<u>ಅನುಬಂಧ-1</u>

| ಕ್ರ. ಸಂ. | ವರ್ಷ | ದೈನಂದಿನ ಉತ್ಪತ್ತಿಯಾಗುತ್ತಿರುವ ಕಸದ ಪ್ರಮಾಣ (ಸಗಟು ತ್ಯಾಜ್ಯ ಉತ್ಪಾದಕರ ತ್ಯಾಜ್ಯವು ಒಳಗೊಂಡಂತೆ) | ಉತ್ಪಾದಿತ ಕಸದ ಸಂಗ್ರಹಣ ಪ್ರಮಾಣ |
|---|---|---|---|
| 1 | 2017-2018 | 4960 | 4537 |
| 2 | 2018-2019 | 5700 | 4440 |
| 3 | 2019-2020 | 6000 | 4440 |
| 4 | 2020-2021 | 6100 | 5350 |
| 5 | 2021-2022 | 6500 | 5700 |

Bhahat
15/2/2022

ಅಧೀಕ್ಷಕ ಅಭಿಯಂತರರು
(ಘನತ್ಯಾಜ್ಯ ನಿರ್ವಹಣೆ-1)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

# ಅನುಬಂಧ–2

## 5 ವರ್ಷದ ಕಸ ಸಂಗ್ರಹಣೆ ವಾರ್ಷಿಕವಾರು:

| ಕ್ರ ಸಂ | ವಾರ್ಷಿಕವಾರು ಘಟಕಗಳಲ್ಲಿ ಸ್ವೀಕರಿದ ಕಸ | ಚಿಕ್ಕ ನಾಗಮಂಗಲ ಮೆ.ಟನ್ | ದೊಡ್ಡ ಬಿದರಕಲ್ಲು ಮೆ.ಟನ್ | ಕನ್ನಹಳ್ಳಿ ಮೆ.ಟನ್ | ಕೆಸಿಡಿಸಿ 1975 ರಲ್ಲಿ ಪ್ರಾರಂಭವಾಗಿದ್ದು, ಇಲಾಖೆ ವತಿಯಿಂದ ನಿರ್ವಹಿಸ ಲಾಗುತ್ತಿದೆ. ಮೆ.ಟನ್ | ಲಿಂಗ ಧೀರನ ಹಳ್ಳಿ ಮೆ.ಟನ್ | ಸೀಗೆಹಳ್ಳಿ ಮೆ.ಟನ್ | ಸುಬ್ಬ ರಾಯನ ಪಾಳ್ಯ ಮೆ.ಟನ್ | ಭೂಭರ್ತಿ ಘಟಕ (ಮಿಟ್ಟಗಾನಹಳ್ಳಿ ಭೂಭರ್ತಿ) ಮೆ.ಟನ್ | ಒಟ್ಟು ಮೆ.ಟನ್ | ಷರ |
|---|---|---|---|---|---|---|---|---|---|---|---|
| 01. | 2021–22 (ಹಸಿ) | 85891 | 18175 | 24316 | 41814 | – | – | – | 1028820 | 170196 | – |
| 02. | 2020–21 (ಹಸಿ) | 76035 | 48333 | 56137 | 33387 | – | 2969 | – | 948449 | 216861 | – |
| 03. | 2019–20 (ಹಸಿ) | 59525 | 39037 | 29697 | 26007 | 2348 | 26146 | 17060 | – | 199815 | – |
| 04. | 2018–19 (ಹಸಿ) | – | – | – | 30391 | – | – | – | | 30391 | Private agency ರ ಘಟಕದ ನಿರ್ವಹಣ ಮಾಡಿರುತ್ತಾ |
| 05. | 2017–18 (ಮಿಶ್ರಿತ) | – | – | – | 42589 | – | – | – | | 42589 | Private agency ರ ಘಟಕದ ನಿರ್ವಹಣ ಮಾಡಿರುತ್ತಾ |

15/2/2022

ಅಧೀಕ್ಷಕ ಅಭಿಯಂತರರು
(ಘನತ್ಯಾಜ್ಯ ನಿರ್ವಹಣೆ-1)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

# ಅನುಬಂಧ–3

| ಕ್ರ ಸಂ | ಘಟಕದ ಹೆಸರು | ಸರಾಸರಿ ಪ್ರತಿ ದಿನ ಹಸಿ ತ್ಯಾಜ್ಯ ಸ್ವೀಕರಿಸುತ್ತಿರುವ ಪ್ರಮಾಣ ಮೆ.ಟನ್ | ಷರಾ |
|---|---|---|---|
| 01. | ಚಿಕ್ಕ ನಾಗಮಂಗಲ | 297 | – |
| 02. | ದೊಡ್ಡ ಬಿದರಕಲ್ಲು | 87 | – |
| 03. | ಕನ್ನಹಳ್ಳಿ | 127 | ಮೆ// ಸತಾರಾಂ ಕಂಪನಿಗೆ ಕಸದಿಂದ ವಿದ್ಯುತ್‌ಶ್ಚಕ್ತಿ ತಯಾರಿಸಲು 18.01.2021 ರಲ್ಲಿ ಹಸ್ತಾಂತರಿಸಲಾಗಿದೆ. |
| 04. | ಕೆಸಿಡಿಸಿ | 138 | – |
| 05. | ಲಿಂಗಧೀರನ ಹಳ್ಳಿ | – | ಮಾನ್ಯ ಎನ್‌ಜಿಟಿ ಆದೇಶದ ಮೇರೆಗೆ ಘಟಕವು ಸ್ಥಗಿತಗೊಂಡಿದ್ದು, ಈಗ ಗೌರವಾನ್ವಿತ ಸುಪ್ರಿಂಕೋರ್ಟ್‌ನ ದಿನಾಂಕ: 06.12.2021 ರಲ್ಲಿ ಘಟಕವನ್ನು ಕೆಎಸ್‌ಪಿಸಿಬಿ ಯಿಂದ Statutory approval ಪಡೆದು ಪ್ರಾರಂಭಿಸಲು ಸೂಚಿಸಿರುತ್ತಾರೆ. ಅದರಂತೆ ಘಟಕ ಪ್ರಾರಭಿಸಲು ಕ್ರಮ ತೆಗೆದುಕೊಳ್ಳಲಾಗಿದೆ. |
| 06. | ಸೀಗೆಹಳ್ಳಿ (ಭೂ ಭರ್ತಿ ವ್ಯವಸ್ಥೆ ಹೊಂದಿರುತ್ತದೆ.) | – | ಘಟಕವು 28.05.2020 ರಿಂದ ಸ್ಥಳೀಯ ಸಮಸ್ಯೆಯಿಂದ ನಿಂತಿದೆ. |
| 07. | ಸುಬ್ಬರಾಯನ ಪಾಳ್ಯ | – | ಘಟಕವು ನವೆಂಬರ್ 2019 ರಿಂದ ಸ್ಥಳೀಯ ಸಮಸ್ಯೆಯಿಂದ ನಿಂತಿದೆ. |
| 08. | ಎಂ.ಎಸ್.ಜಿ.ಪಿ(ಖಾಸಗಿ ಮಾಲಿಕತ್ವದ ಘಟಕ) | 450 | – |
|  | ಒಟ್ಟು | **1099.00** |  |

15/2/2022
ಅಧೀಕ್ಷಕ ಅಭಿಯಂತರರು
(ಘನತ್ಯಾಜ್ಯ ನಿರ್ವಹಣೆ-1)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

# ಅನುಬಂಧ–4

| ಕ್ರ. ಸಂ | ವಾರ್ಷಿಕ ವಿವರ | ಘಟಕಗಳಿಗೆ ಖರ್ಚಾದ ಹಣ (ರೂ.ಕೋಟಿಗಳಲ್ಲಿ) | | | | | | | ಒಟ್ಟು |
|---|---|---|---|---|---|---|---|---|---|
| | | ಚಿಕ್ಕನಾಗಮಂಗಲ | ದೊಡ್ಡಬಿದರಕಲ್ಲು | ಕನ್ನಹಳ್ಳಿ | ಕೆಸಿಡಿಸಿ | ಲಿಂಗಧೀರನಹಳ್ಳಿ | ಸೀಗೆಹಳ್ಳಿ | ಸುಬ್ಬರಾಯನಪಾಳ್ಯ | |
| 01. | 2017–18 | 1.60 | 2.50 | – | 4.5 | – | 1.50 | 2.25 | 12.35 |
| 02. | 2018–19 | 3.79 | 2.60 | 1.33 | 5.97 | 0.60 | 1.00 | 0.60 | 15.89 |
| 03. | 2019–20 | 3.02 | 1.72 | 4.50 | 4.05 | 1.56 | 0.85 | 1.64 | 17.35 |
| 04. | 2020–21 | 3.83 | 3.54 | 1.25 | 3.18 | – | 3.16 | 1.63 | 16.59 |
| 05. | 2021–22 | 6.92 | 3.10 | 2.68 | 3.40 | 2.00 | 0.16 | 0.98 | 19.24 |
| ಒಟ್ಟು | | **19.16** | **13.46** | **9.76** | **21.10** | **4.16** | **6.67** | **7.10** | **81.42** |

15/2/2022

ಅಧೀಕ್ಷಕ ಅಭಿಯಂತರರು
(ಘನತ್ಯಾಜ್ಯ ನಿರ್ವಹಣೆ-1)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ